KA / BG - GPO/ 2515 /WPP-47/ 2009 - 2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

**ವಿಶೇಷ ಪತ್ರಿಕೆ**

| ಭಾಗ–IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೦೭ |
|---|---|---|

**Cabinet Affairs and Personnel and Administrative Reforms Secretariat**

**Notification**

**No. GS 185 GOB 2008, Bangalore, Dated: 31st August, 2009**

Shri B.S.Yeddyurappa, Chief Minister of Karnataka, has forwarded with his letter No.PSCM/3233/2009, dt. 31st August 2009, the letter of resignation of Shri V. Somanna, Minister for Housing and Muzrai, with the recommendation for its acceptance.

I have accepted the recommendation of the Chief Minister and in exercise of the powers vested in me under Article 164(1) of the Constitution of India, I, H.R. Bhardwaj, Governor of Karnataka, hereby accept the resignation of Shri V. Somanna, Minister for Housing and Muzrai, with immediate effect.

**H.R. Bhardwaj**
**Governor of Karnataka**

By order and in the name of the Governor of Karnataka,

**S. Thippeswamy**
Under Secretary to Government
D.C.A & D.P.A.R. (State Protocol)

No. DCA 56 GAM 2008
Dated : 7th September, 2009

**ವಿಶೇಷ ಪತ್ರಿಕೆ**

| ಭಾಗ – III | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೦೮ |
|---|---|---|

**ಕರ್ನಾಟಕ ವಿಧಾನಸಭೆ ಸಚಿವಾಲಯ**

**ಸಂ. ವಿಸಸ/ ಶಾರಶಾ/ 07/ ಕರೆ 2008, ಬೆಂಗಳೂರು, ದಿನಾಂಕ : 31ನೇ ಆಗಸ್ಟ್, 2009**

ವಿಷಯ :– ಕರ್ನಾಟಕ ವಿಧಾನಸಭೆಯ ಅಧಿವೇಶನದ ದಿನಾಂಕ ಮತ್ತು ಸಮಯದ ಬಗ್ಗೆ.

ದಿನಾಂಕ 29ನೇ ಜುಲೈ 2009 ರಂದು ಅನಿರ್ದಿಷ್ಟ ಕಾಲದವರೆಗೆ ಮುಂದೂಡಲಾದ ಹದಿಮೂರನೇ ವಿಧಾನಸಭೆಯ ಮೂರನೇ ಅಧಿವೇಶನದ ಮುಂದುವರೆದ ಉಪವೇಶನವು ಪುನಃ **ಬುಧವಾರ, ದಿನಾಂಕ 9ನೇ ಸೆಪ್ಟೆಂಬರ್, 2009 ರಂದು ಬೆಳಿಗ್ಗೆ 11.00 ಗಂಟೆಗೆ** ಬೆಂಗಳೂರಿನ ವಿಧಾನಸೌಧದಲ್ಲಿರುವ ವಿಧಾನಸಭೆಯ ಸಭಾಂಗಣದಲ್ಲಿ ಸೇರಲಿದೆ.

ಸದರಿ ಸಭೆಗೆ ತಾವು ಹಾಜರಾಗಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ,

**ಎಸ್.ಬಿ. ಪಾಟೀಲ್**
ಕಾರ್ಯದರ್ಶಿ
ಕರ್ನಾಟಕ ವಿಧಾನಸಭೆ

**KARNATAKA LEGISLATIVE ASSEMBLY SECRETARIAT**

**No. KLAS/LGA/SUM/07/2009, BANGALORE, DATED : 31st AUGUST, 2009**

Sub :- Sessions of Karnataka Legislative Assembly date and time – intimation reg.

The adjourned meeting of the Third Session of the Thirteenth Assembly which was adjourned sine-die on 29th July, 2009 is convened to meet again on **Wednesday, the 9th September, 2009 at 11.00 a.m.** in the Legislative Assembly Chambers, Vidhana Soudha, Bangalore.

I request you kindly to attend the meeting.

Yours faithfully,
**S.B. PATIL**
Secretary
Karnataka Legislative Assembly

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೦೯ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 990 ವೆಚ್ಚ –12/ 09, ಬೆಂಗಳೂರು, ದಿನಾಂಕ : 17ನೇ ಆಗಸ್ಟ್, 2009**

ಸರ್ಕಾರದ ಇಲಾಖೆಗಳ ಮತ್ತು ಇತರೆ ಸಂಗ್ರಹಣಾ ಸಂಸ್ಥೆಗಳಿಗೆ ಈ ಕೆಳಕಂಡ ಕಾಮಗಾರಿಗಳಲ್ಲಿನ ನಿರ್ಮಾಣ ಕಾರ್ಯವನ್ನು ಕಾಮಗಾರಿಯ ಅಂದಾಜು ಮೊತ್ತ ರೂ. 50.00 ಲಕ್ಷಗಳ ಮಿತಿಯವರೆಗೆ ಮಾತ್ರ ಕರ್ನಾಟಕ ಭೂಸೇನಾ ನಿಗಮದ ಮೂಲಕ ಕೈಗೊಳ್ಳಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ರ ಕಲಂ 4(ಜಿ) ರಡಿ ವಿನಾಯಿತಿಯನ್ನು ಅಧಿಸೂಚನೆ ಸಂ : PWD 567 FC-3/07, ದಿನಾಂಕ : 7.01.08 ರಲ್ಲಿ ದಿ : 1.1.2008 ರಿಂದ 31.3.2010 ರವರೆಗೆ ನೀಡಲಾಗಿತ್ತು.

1. School, College and Anganwadi buildings
2. Hostel rooms and buildings
3. Housing for weaker sections and Low Income Groups
4. Primary Health Centres, hospitals and staff quarters
5. Rural Water Supply and sanitation works.

ಮೇಲ್ಕಂಡ ಕಾಮಗಾರಿಗಳಲ್ಲಿನ ಪ್ರತಿ ಕಾಮಗಾರಿಯ ನಿರ್ಮಾಣ ಕಾರ್ಯದ ಅಂದಾಜು ಮೊತ್ತದ ಮಿತಿಯನ್ನು ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ರೂ. 50.00 ಲಕ್ಷಗಳಿಂದ ರೂ. 1.00 ಕೋಟಿಗೆ ಹೆಚ್ಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೦ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 926 ವೆಚ್ಚ –12/ 09, ಬೆಂಗಳೂರು, ದಿನಾಂಕ : 18ನೇ ಆಗಸ್ಟ್, 2009**

""ಸುವರ್ಣ ವಸ್ತ್ರ ನೀತಿ'' 2008–2013 ಯೋಜನೆಯ ಅನುಷ್ಠಾನಕ್ಕಾಗಿ, ಜವಳಿ ನೀತಿಯಲ್ಲಿ ವಿವಿಧ ಚಟುವಟಿಕೆಗಳ ಅಧ್ಯಯನ ಕಾರ್ಯಕ್ಕಾಗಿ/ಕುರಿತಂತೆ ನೇರವಾಗಿ ಮೆ : IL & FS Ltd., (Infrastructure Leasing and Financial Services

Limited) ಸಂಸ್ಥೆಯನ್ನು ""ಸ್ಕೀಮ್ ಮ್ಯಾನೇಜ್‌ಮೆಂಟ್ ಏಜೆನ್ಸಿ"ಯಾಗಿ (Scheme Management Agency) ಈ ಕೆಳಕಂಡ ದರಗಳಲ್ಲಿ ನಿರ್ವಹಿಸಲು

| | | |
|---|---|---|
| 1. | Monthly retainership fee | ಮಾಹೆಯಾನ ರೂ. 7.42 ಲಕ್ಷಗಳು (ಸೇವಾ ತೆರಿಗೆ ಹೊರತುಪಡಿಸಿ) |
| 2. | The success fee | 1.5% of the project cost for Infrastructure project & 2.5% of the project cost for HRD and skill upgradation project |

ವಹಿಸುವುದಕ್ಕಾಗಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ವಿಶೇಷ ಪತ್ರಿಕೆ

| ಭಾಗ–IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೧ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 935 ವೆಚ್ಚ –12/ 09, ಬೆಂಗಳೂರು, ದಿನಾಂಕ : 18ನೇ ಆಗಸ್ಟ್, 2009**

""12ನೇ ಹಣಕಾಸು ಆಯೋಗದ"ದ ಅನುದಾನದಡಿಯಲ್ಲಿ ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇದಕ್ಕೆ ಹೆಚ್ಚುವರಿಯಾಗಿ ಫ್ಯಾಕಲ್ಟಿ ಬ್ಲಾಕ್–2 ರ ಕಟ್ಟಡವನ್ನು ರೂ. 70.00 ಲಕ್ಷಗಳ ವೆಚ್ಚದಲ್ಲಿ ನಿರ್ಮಾಣ ಮಾಡುವ ಕಾಮಗಾರಿಯನ್ನು ನೇರವಾಗಿ ಕರ್ನಾಟಕ ರಾಜ್ಯ ಸರ್ಕಾರಿ ಸ್ವಾಮ್ಯದ ಸಂಸ್ಥೆಯಾದ ಕರ್ನಾಟಕ ಭೂಸೇನಾ ನಿಗಮ ನಿಯಮಿತರವರಿಗೆ ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ–1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ)ಗೆ, ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ವಿಶೇಷ ಪತ್ರಿಕೆ

| ಭಾಗ–IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೨ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 954 ವೆಚ್ಚ –12/ 09, ಬೆಂಗಳೂರು, ದಿನಾಂಕ : 18ನೇ ಆಗಸ್ಟ್, 2009**

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ""ರಾಷ್ಟ್ರೀಯ ಸೈನಿಕ ಸ್ಮಾರಕ" ವನ್ನು ಭಾರತೀಯ ಸೇನೆಯಲ್ಲಿ ದೇಶ ರಕ್ಷಣೆಗಾಗಿ ಹುತಾತ್ಮರಾದವರ ನೆನಪಿಗೆ ವೈಶಿಷ್ಟ ಪೂರ್ಣವಾಗಿ ನಿರ್ಮಿಸಲು ನೇರವಾಗಿ ಮೆ : ಮ್ಯಾಥ್ಯೂ ಅಂಡ್ ಘೋಷ್

ಆರ್ಕಿಟೆಕ್ಟ್ ಪ್ರೈವೇಟ್ ಲಿಮಿಟೆಡ್ ಸಲಹೆಗಾರರ ಸೇವೆಯನ್ನು ಪಡೆಯಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ನಗರಾಭಿವೃದ್ಧಿ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

**ವಿಶೇಷ ಪತ್ರಿಕೆ**

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೩ |
|---|---|---|

**ಆರ್ಥಿಕ ಸಚಿವಾಲಯ**

**ಅಧಿಸೂಚನೆ**

**ಸಂ. ಆಇ 1020 ವೆಚ್ಚ –12/ 09, ಬೆಂಗಳೂರು, ದಿನಾಂಕ : 28ನೇ ಆಗಸ್ಟ್, 2009**

ಬೆಂಗಳೂರು, ಕೆ.ಆರ್. ವೃತ್ತದ ಬಳಿ ಇರುವ ಸರ್ವೆ ಸೆಟ್ಲ್‌ಮೆಂಟ್ ಅಂಡ್ ಲ್ಯಾಂಡ್ ರೆಕಾರ್ಡ್ಸ್ (ಎಸ್.ಎಸ್.ಎಲ್.ಆರ್.) ಕಛೇರಿಯ ಕಟ್ಟಡಕ್ಕೆ ಹೊಂದಿಕೊಂಡಿರುವ ಜಾಗದಲ್ಲಿ (annexe basement) ಭೂಮಿ ಮಾನಿಟರಿಂಗ್ ಸೆಲ್ ಮತ್ತು ಅದರ ತರಬೇತಿ ಸೌಲಭ್ಯಗಳನ್ನು ಒದಗಿಸುವ ಸಲುವಾಗಿ ಭೂಮಿ ಮಾನಿಟರಿಂಗ್ ಸೆಲ್ ಕಟ್ಟಡ ನವೀಕರಿಸುವ ಕಾಮಗಾರಿಯನ್ನು ರೂ. 80.00 ಲಕ್ಷಗಳ ವೆಚ್ಚದಲ್ಲಿ ನೇರವಾಗಿ ಕರ್ನಾಟಕ ಭೂಸೇನಾ ನಿಗಮಕ್ಕೆ (KLAC) ವಹಿಸಲು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ – 1999 ರ ಕಲಂ 4(ಜಿ) ರಡಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಸರ್ಕಾರವು ಕಂದಾಯ ಇಲಾಖೆಗೆ ಪಾರದರ್ಶಕತೆ ಕಾಯ್ದೆಯಿಂದ ವಿನಾಯಿತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಚಂದ್ರಕುಮಾರ್**
ಸರ್ಕಾರದ ಉಪ ಕಾರ್ಯದರ್ಶಿ
ಆರ್ಥಿಕ ಇಲಾಖೆ (ಸಂಗ್ರಹಣಾ ಕೋಶ)

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೪ |
|---|---|---|

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಅಧಿಸೂಚನೆ**

**ಸಂ. ಸಿಆಸುಇ 20 ವಿಮಾಅ 2009, ಬೆಂಗಳೂರು, ದಿನಾಂಕ : 13ನೇ ಆಗಸ್ಟ್, 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎರ ಉಪಕಲಂ (2) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು, 01ನೇ ಸೆಪ್ಟೆಂಬರ್ 2009ರ ದಿನಾಂಕವನ್ನು ಈ ಮೂಲಕ ಅಧಿಸೂಚಿಸಿದ್ದು, ಆ ದಿನಾಂಕದಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ (ಬಿ.ಬಿ.ಎಮ್.ಪಿ.). ಬೆಂಗಳೂರು ಇದರ ರೂ. 10.00 (ಹತ್ತು) ಲಕ್ಷ ಮತ್ತು ಅದಕ್ಕೂ ಮೇಲ್ಪಟ್ಟ ಎಲ್ಲಾ ಸಂಗ್ರಹಣೆಗಳನ್ನು ವಿದ್ಯುನ್ಮಾನ ಸಂಗ್ರಹಣೆ ವೇದಿಕೆ ಮೂಲಕ (through e-Procurement Platform) ಸಂಗ್ರಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಂದ್ರಶೇಖರ್**
ಪೀಠಾಧಿಕಾರಿ – 1
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ – ಆಡಳಿತ)

**PERSONNEL AND ADMINISTRATIVE REFORMS SECRETARIAT**

**NOTIFICATION**

**No. DPAR 20 EGV 2009, Bangalore, Dated : 13th August, 2009**

In exercise of the powers conferred by sub-section (2) of section 18A of the Karnataka Transparency in Public Procurements Act, 1999, (Karnataka Act 29 of 2000) the Government of Karnataka hereby notifies the first day of September, 2009 to be the day from which the Bruhath Bengaluru Mahanagara Palike (BBMP), Bengaluru, shall procure all its procurements valued at Rs. 10.00 (ten) lakhs and above through e-Procurement platform.

By order and in the name of the Governor of Karnataka
**Chandrashekhar**
Desk Officer - 1
Department of Personnel and
Administrative Reforms (e-Governance)

## ವಿಶೇಷ ಪತ್ರಿಕೆ

| ಭಾಗ–IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೫ |
|---|---|---|

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂ. ಸಾರಿಇ 40 ಸಾಸಂಸೇ 2009, ಬೆಂಗಳೂರು, ದಿನಾಂಕ : 19ನೇ ಆಗಸ್ಟ್, 2009**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ : 5 ಉಪ ಕಲಂ–2ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು, 1961ರ ನಿಯಮ 3(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜೆ. ಅರುಣ ಚಕ್ರವರ್ತಿ, ಭಾ.ಪೋ.ಸೇ., ನಿರ್ದೇಶಕರು (ಭದ್ರತಾ, ಜಾಗೃತಿ ಮತ್ತು ಪರಿಸರ), ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ಬೆಂಗಳೂರು ಇವರನ್ನು ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯ ನಿರ್ದೇಶಕರ ಮಂಡಳಿಯಲ್ಲಿ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶ್ರೀಧರ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೬ |
|---|---|---|

**ಸಾರಿಗೆ ಸಚಿವಾಲಯ**

**ಅಧಿಸೂಚನೆ**

**ಸಂ. ಸಾರಿಇ 51 ಸಾಸಂಸೇ 2009, ಬೆಂಗಳೂರು, ದಿನಾಂಕ : 19ನೇ ಆಗಸ್ಟ್, 2009**

ರಸ್ತೆ ಸಾರಿಗೆ ನಿಗಮಗಳ ಅಧಿನಿಯಮ 1950ರ (1950ರ ಕೇಂದ್ರ ಅಧಿನಿಯಮ 64) ಕಲಂ .5 ಉಪ ಕಲಂ–2ರಲ್ಲಿ ಹಾಗೂ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ನಿಯಮಾವಳಿಗಳು, 1961ರ ನಿಯಮ 3(3) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಹೇಮರಾಜು, ನಿರ್ದೇಶಕರು, (ತಾಂತ್ರಿಕ) ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ, ಇವರನ್ನು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆಯ ನಿರ್ದೇಶಕರ ಮಂಡಳಿಯಲ್ಲಿ ಅಧಿಕಾರಿಯುತ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶ್ರೀಧರ**
ಸರ್ಕಾರದ ಅಧೀನ ಕಾರ್ಯದರ್ಶಿ, ಸಾರಿಗೆ ಇಲಾಖೆ

ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೭ |
|---|---|---|

**ಕಂದಾಯ ಸಚಿವಾಲಯ**

**ತಿದ್ದುಪಡಿ**

**ಸಂ. ಕಂಇ 135 ಎಲ್‌ಆರ್‌ಎಂ 2009, ಬೆಂಗಳೂರು, ದಿನಾಂಕ : 20ನೇ ಸೆಪ್ಟೆಂಬರ್, 2009**

ಸರ್ಕಾರಿ ಆದೇಶ ಸಂಖ್ಯೆ : ಕಂಇ 76 ಎಲ್‌ಆರ್‌ಎಂ 93 (ಭಾಗ) ದಿನಾಂಕ : 19.05.1997ರ ಕಂಡಿಕೆ (2)ರ ಉಪ ಕಂಡಿಕೆ (3) ರಲ್ಲಿ ಸೂಚಿಸಿರುವ ""ದ್ವಿತೀಯ ದರ್ಜೆ ಸಹಾಯಕರು" ಎಂಬುದರ ಬದಲಾಗಿ ""ಪ್ರಥಮ ದರ್ಜೆ ಸಹಾಯಕರು ಅಥವಾ ದ್ವಿತೀಯ ದರ್ಜೆ ಸಹಾಯಕರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎನ್. ನಾರಾಯಣಗೌಡ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಭೂ ಸುಧಾರಣೆ)

ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೮ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಕಂದಾಯ ಸಚಿವಾಲಯ**

**ವಿಷಯ :** ಬೆಂಗಳೂರು ಟರ್ಫ್ ಕ್ಲಬ್‌ಗೆ ಸರ್ಕಾರಿ ಜಮೀನು ಮಂಜೂರಾತಿ ಬಗ್ಗೆ.

**ಓದಲಾಗಿದೆ :**
1) ಅಧ್ಯಕ್ಷರು, ಬೆಂಗಳೂರು ಟರ್ಫ್ ಕ್ಲಬ್ ಲಿಮಿಟೆಡ್, ಬೆಂಗಳೂರು ಇವರ ಪತ್ರದ ದಿ : 25.08.2008.
2) ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ ಇವರ ಪತ್ರ ಸಂಖ್ಯೆ: ಎಲ್‌ಎನ್‌ಡಿ (ಎನ್‌ಎ) ಸಿಆರ್ 200/08–09, ದಿ:05.02.2009.

**ಪ್ರಸ್ತಾವನೆ :**

ಅಧ್ಯಕ್ಷರು, ಬೆಂಗಳೂರು ಟರ್ಫ್ ಕ್ಲಬ್ ಲಿಮಿಟೆಡ್, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಪತ್ರದ ದಿ:25.08.2008ರಲ್ಲಿ ಬೆಂಗಳೂರು ನಗರದ ಕೇಂದ್ರ ಭಾಗದಲ್ಲಿರುವ ಬೆಂಗಳೂರು ಟರ್ಫ್ ಕ್ಲಬನ್ನು ಸ್ಥಳಾಂತರಿಸಲು ಯಲಹಂಕದ ಸಮೀಪ ಅಥವಾ ಬೇರೆ ಎಲ್ಲಾದರು 150 ಎಕರೆ ಸರ್ಕಾರಿ ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಜಿಲ್ಲಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿನ ಪತ್ರದ ದಿ:05.02.2009ರಲ್ಲಿ ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿ, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ದೊಡ್ಡಜಾಲ ಅಮಾನಿ ಕೆರೆ ಸ.ನಂ.1ರಲ್ಲಿ 48 ಎಕರೆ ಮತ್ತು ಸ.ನಂ.15ರಲ್ಲಿ 8.10 ಎಕರೆ ಪ್ರದೇಶದಲ್ಲಿ ಕೆರೆಯ ನೀರು ನಿಂತಿರುವುದಾಗಿ, ಸ.ನಂ.1, 8, 11, 15 ಮತ್ತು 22ರಲ್ಲಿ ಒಟ್ಟು 95.32 ಎಕರೆ ಈ ಕೆಳಕಂಡ ಜಮೀನುಗಳು ನೀರು ನಿಲ್ಲದೇ ಇರುವ ಪ್ರದೇಶಗಳಾಗಿರುವುದಾಗಿ ತಿಳಿಸಿರುತ್ತಾರೆ. ಜಮೀನಿನ ವಿವರಗಳು ಈ ಕೆಳಕಂಡಂತಿವೆ.

| ಕ್ರ. ಸಂ. | ಗ್ರಾಮ | ತರಹೆ | ಸ.ನಂ. | ಒಟ್ಟು ವಿಸ್ತೀರ್ಣ ಎ/ ಗು | ನೀರು ನಿಂತಿರುವ ವಿಸ್ತೀರ್ಣ | ನೀರು ನಿಲ್ಲದೇಯಿರುವ ವಿಸ್ತೀರ್ಣ |
|---|---|---|---|---|---|---|
| 1 | ದೊಡ್ಡಜಾಲ ಅಮಾನಿಕೆರೆ | ಸರ್ಕಾರಿ ಕೆರೆ | 1 | 92.13 | 48.00 | 44.13 |
| 2 | ದೊಡ್ಡಜಾಲ | ಸರ್ಕಾರಿ ಕೆರೆ | 15 | 11.30 | 8.10 | 3.20 |
| 3 | ಚಿಕ್ಕಜಾಲ | ಸರ್ಕಾರಿ ಖರಾಬು ಕೆರೆ | 11 | 5.05 | – | 5.05 |

| ಕ್ರ. ಸಂ. | ಗ್ರಾಮ | ತರಹೆ | ಸ.ನಂ. | ಒಟ್ಟು ವಿಸ್ತೀರ್ಣ ಎ/ ಗು | ನೀರು ನಿಂತಿರುವ ವಿಸ್ತೀರ್ಣ | ನೀರು ನಿಲ್ಲದೇಯಿರುವ ವಿಸ್ತೀರ್ಣ |
|---|---|---|---|---|---|---|
| 4 | ಚಿಕ್ಕಜಾಲಾ | ಸರ್ಕಾರಿ ಕೆರೆ | 8 | 27.31 | – | 27.31 |
| 5 | ಮೀನುಕುಂಟೆ | ಸರ್ಕಾರಿ ಖರಾಬು | 22 | 15.03 | – | 15.03 |
| | | | ಒಟ್ಟು | **152.02** | **56.10** | **95.32** |

ಮೇಲ್ಕಂಡ ಜಮೀನುಗಳ ಪೈಕಿ ದೊಡ್ಡಜಾಲ ಅಮಾನಿಕೆರೆ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿದ್ದು, ಉಳಿದ ಸರ್ವೆ ನಂಬರುಗಳು ಕಂದಾಯ ಇಲಾಖೆ ಅಧೀನದಲ್ಲಿರುವುದಾಗಿ ಜಿಲ್ಲಾಧಿಕಾರಿಗಳು ವರದಿ ಮಾಡಿರುತ್ತಾರೆ. ಸಣ್ಣ ನೀರಾವರಿ ಇಲಾಖೆಯು ಅನಧಿಕೃತ ಟಿಪ್ಪಣಿ ಸಂಖ್ಯೆ: ಸನಿಇ 60 ಮಸಾವಿ 2009, ದಿ:13.05.2009ರಲ್ಲಿ ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:31343/95ಕ್ಕೆ ಸಂಬಂಧಿಸಿದಂತೆ ದಿ:22.08.95ರಂದು ನೀಡಿರುವ ಮಧ್ಯಂತರ ಆದೇಶ ಹಾಗೂ ಸದನವು ತೆಗೆದುಕೊಂಡಿರುವ ನಿರ್ಣಯದ ಮೇರೆಗೆ ಸಣ್ಣ ನೀರಾವರಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಬೆಂಗಳೂರು ಉತ್ತರ ತಾಲ್ಲೂಕು, ದೊಡ್ಡಜಾಲ ಅಮಾನಿ ಕೆರೆಯ ನೀರು ನಿಲ್ಲದೇ ಇರುವ 95.32 ಎಕರೆ ಜಮೀನನ್ನು ಬೆಂಗಳೂರು ಟರ್ಫ್ ಕ್ಲಬ್‌ಗೆ ಮಂಜೂರು ಮಾಡಲು ಸೂಕ್ತ ನಿರ್ಣಯ ಕೈಗೊಳ್ಳಬಹುದಾಗಿದೆ ಎಂದು ತಿಳಿಸಿರುತ್ತದೆ. ರಾಜ್ಯ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 31343/95ಕ್ಕೆ ದಿ:22.08.95ರಂದು ನೀಡಿರುವ ಮಧ್ಯಂತರ ಆದೇಶದಲ್ಲಿ ಬೆಂಗಳೂರು ಮೆಟ್ರೋಪಾಲಿಟನ್ ವ್ಯಾಪ್ತಿಯಲ್ಲಿ ಬರುವ ಕೆರೆ ಮತ್ತು ಕೆರೆ ಅಂಗಳವನ್ನು ಯಾವ ಉದ್ದೇಶಕ್ಕೂ ಮಂಜೂರು ಮಾಡಬಾರದೆಂದು ನಿರ್ದೇಶನ ನೀಡಿರುತ್ತದೆ.

ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದ ಹಿನ್ನಲೆಯಲ್ಲಿ ಮೇಲ್ಕಂಡ ಜಮೀನುಗಳನ್ನು ಬೆಂಗಳೂರು ಟರ್ಫ ಕ್ಲಬ್‌ಗೆ ಮಂಜೂರು ಮಾಡುವ ಬಗ್ಗೆ ಮಾನ್ಯ ಉಚ್ಚ ನ್ಯಾಯಾಲಯದ ಪೂರ್ವಾನುಮತಿಯನ್ನು ಪಡೆಯುವ ಸಲುವಾಗಿ ಮಾನ್ಯ ಅಡ್ವೋಕೇಟ್ ಜನರಲ್‌ರವರ ಅರ್ಜಿ ಸಲ್ಲಿಸಿದ್ದು, ಈ ಅರ್ಜಿಯನ್ನು ದಿನಾಂಕ :13.07.2009 ರಂದು ವಿಚಾರಣೆ ನಡೆಸಿ ಮಾನ್ಯ ಉಚ್ಚ ನ್ಯಾಯಾಲಯವು ಈ ಕೆಳಕಂಡಂತೆ ಆದೇಶ ನೀಡಿರುತ್ತದೆ ಎಂದು ಅಡ್ವೋಕೇಟ್ ಜನರಲ್ ಅವರು ತಮ್ಮ ಪತ್ರ ದಿ:14/16.07.2009ರಲ್ಲಿ ತಿಳಿಸಿರುತ್ತಾರೆ.

"It s open to the State Government to consider the Application for land grant and pass appropriate orders thereon in accordance with law."

ಗೌರವಾನ್ವಿತ ಸದನವು ಕರ್ನಾಟಕ ರಾಜ್ಯದ ಯಾವುದೇ ಕೆರೆಗಳನ್ನು ಖಾಸಗಿಯವರಿಗೆ ವಹಿಸುವುದನ್ನು ನಿರ್ಬಂಧಿಸಿರುವ ಬಗ್ಗೆ ಒಮ್ಮತದಿಂದ ನಿರ್ಣಯಿಸಿದ್ದು, ಸದರಿ ನಿರ್ಣಯವನ್ನು ಗೌರವಿಸಿ ಮತ್ತು ಸದರಿ ನಿರ್ಣಯಕ್ಕೆ ಚ್ಯುತಿ ಬಾರದಂತೆ ನೀರು ನಿಲ್ಲದೆ ಇರುವ ಕೆರೆ ಪ್ರದೇಶ 95.32 ಎಕರೆ ಪೈಕಿ 10 ಎಕರೆ ಜಮೀನನ್ನು ರಾಷ್ಟ್ರೀಯ ಹೆದ್ದಾರಿ ವಿಸ್ತರಣೆಗೆ ಮೀಸಲಿಟ್ಟು, 85 ಎಕರೆ ಜಮೀನನ್ನು ಬೆಂಗಳೂರು ಟರ್ಫ ಕ್ಲಬ್‌ಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಲು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 718 ಎಲ್‌ಜಿಬಿ 2008, ಬೆಂಗಳೂರು, ದಿನಾಂಕ : 27.07.2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಜಾಲ ಹೋಬಳಿ, ದೊಡ್ಡಜಾಲ ಅಮಾನಿಕೆರೆ ಸ.ನಂ.1, ದೊಡ್ಡಜಾಲ ಸ.ನಂ.15, ಚಿಕ್ಕಜಾಲ ಸ.ನಂ.11, ಚಿಕ್ಕಜಾಲ ಸ.ನಂ.8 ಮತ್ತು ಮೀನುಕುಂಟೆ ಸ.ನಂ.22ರಲ್ಲಿ ಒಟ್ಟು 85 ಎಕರೆ ನೀರು ನಿಲ್ಲದೇ ಇರುವ ಕೆರೆ ಪ್ರದೇಶವನ್ನು, ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19ನ್ನು ಸಡಿಲಿಸಿ ಇದೇ ನಿಯಮಾವಳಿಯ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ 30 ವರ್ಷಗಳ ಅವಧಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ಬೆಂಗಳೂರು ಟರ್ಫ್ ಕ್ಲಬ್ ಇವರಿಗೆ ಮಂಜೂರು ಮಾಡಲು ಸರ್ಕಾರದ ತಾತ್ವಿಕ ಅನುಮೋದನೆ ನೀಡಲಾಗಿದೆ.

1) ಸದರಿ ಜಮೀನಿಗೆ ಪ್ರತಿ ಎಕರೆಗೆ ವಾರ್ಷಿಕ ಗುತ್ತಿಗೆ ದರ ರೂ. 50,000/- ನಿಗಧಿ ಪಡಿಸಿ, ಪ್ರತಿ 2 ವರ್ಷಗಳಿಗೊಮ್ಮೆ ಗುತ್ತಿಗೆ ದರವನ್ನು ಶೇಕಡ 10ರಷ್ಟು ಹೆಚ್ಚಿಸುವುದು.

2) ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡಿರುವ 10 ಎಕರೆ ಜಮೀನನ್ನು ರಾಷ್ಟ್ರೀಯ ಹೆದ್ದಾರಿ ವಿಸ್ತರಣೆಗೆ ಮಾತ್ರ ಉಪಯೋಗಿಸಿಕೊಳ್ಳಲು ಹಾಗೂ ಈ 10 ಎಕರೆ ವಿಸ್ತೀರ್ಣದಲ್ಲಿ ಯಾವುದೇ ರೀತಿಯ ಕಟ್ಟಡಗಳನ್ನು ನಿರ್ಮಾಣ ಮಾಡತಕ್ಕದ್ದಲ್ಲ.

3) ನೀರು ನಿಲ್ಲುವ ಪ್ರದೇಶ 56.10 ಎಕರೆ ಕೆರೆ ಜಮೀನನ್ನು ಸರ್ಕಾರದ ನಿರ್ವಹಣೆಗೆ ಕಾಯ್ದಿರಿಸತಕ್ಕದ್ದು.

4) ಗುತ್ತಿಗೆ ನೀಡಲು ಉದ್ದೇಶಿಸಿರುವ 85 ಎಕರೆ ಪ್ರದೇಶದಲ್ಲಿ 10 ಎಕರೆಯನ್ನು ವಾಹನ ನಿಲುಗಡೆಗೆ ಕಡ್ಡಾಯವಾಗಿ ಮೀಡಲಿಡುವುದು. ಅದರಂತೆ ಟರ್ಫ್ ಕ್ಲಬ್‌ಗೆ ಬರುವ ಎಲ್ಲಾ ವಾಹನಗಳನ್ನು ವಾಹನಗಳ ತಂಗುದಾಣಕ್ಕಾಗಿ ಗುರುತಿಸಿದ ಜಾಗದಲ್ಲೇ ನಿಲ್ಲಿಸತಕ್ಕದ್ದು.

5) ಕೆರೆಗೆ ಹಾದುಹೋಗುವ ನಾಲೆಗಳಿಗೆ ತಿರುಗು ಕಾಲುವೆ ಮಾಡಿ ಮಳೆ ನೀರು ಕೆರೆಗೆ ಸರಾಗವಾಗಿ ಹಾದುಹೋಗಲು ಸರ್ಕಾರವು ಸೂಕ್ತವಾದ ಯೋಜನೆ ರೂಪಿಸುವುದು. ಈ ಯೋಜನೆಯನ್ನು ಟರ್ಫ್ ಕ್ಲಬ್ ಜಾರಿಗೆ ತರಲು ಅವಶ್ಯಕ ವ್ಯವಸ್ಥೆ ಮಾಡುವುದು.

6) ಟರ್ಫ್ ಕ್ಲಬ್‌ನೊಂದಿಗೆ ಗುತ್ತಿಗೆ ಕರಾರು ಪ್ರಮಾಣ ಪತ್ರ ಮಾಡಿಕೊಳ್ಳುವ ಮುನ್ನ ಕರಡು ಪ್ರಮಾಣ ಪತ್ರಕ್ಕೆ ಸರ್ಕಾರದ ಪೂರ್ವಾನುಮೋದನೆ ಪಡೆಯತಕ್ಕದ್ದು.

ಈ ಆದೇಶವನ್ನು ಜಲಸಂಪನ್ಮೂಲ ಇಲಾಖೆಯ (ಸಣ್ಣ ನೀರಾವರಿ) ಅನಧಿಕೃತ ಟಿಪ್ಪಣಿ ಸಂಖ್ಯೆ:ಸನಿಇ 60 ಮಸಾವಿ 2009, ದಿ:13.05.2009 ಮತ್ತು ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ:ಲಾ 160 ಅಭಿಪ್ರಾಯ–1/2009, ದಿ:23.05.2009ರಲ್ಲಿ ನೀಡಿದ ಅಭಿಪ್ರಾಯದ ಮೇರೆಗೆ ಹೊರಡಿಸಲಾಗಿದೆ.

ಸರ್ವೆ ನಂಬರುವಾರು ವಿವರಗಳ ಕುರಿತು ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಇ. ಈಶ್ವರ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೧೯ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಶಿಕ್ಷಣ ಸಚಿವಾಲಯ

**ವಿಷಯ :** ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕರ ನೇರ ನೇಮಕಾತಿಗೆ ಸಂಬಂಧಿಸಿದಂತೆ ಹಿಂದಿ ಶಿಕ್ಷಕ್, ಹಿಂದಿ ಶಿಕ್ಷಣ ಪಾರಂಗತ್ ಹಾಗೂ ಹಿಂದಿ ಶಿಕ್ಷಾ ಸ್ನಾತಕ್ ಪದವಿಗಳನ್ನು ಬಿ.ಇಡಿ., ಪದವಿಗೆ ಸಮನಾಂತರವೆಂದು ಪರಿಗಣಿಸುವ ಬಗ್ಗೆ.

**ಓದಲಾಗಿದೆ :**

1) ಸಾ.ಶಿ.ಇ. ಬೆಂಗಳೂರು ಇವರ ಪತ್ರ ಸಂಖ್ಯೆ.ಸಿ4(1) ಪ್ರೌಶಿ.ಹಿಂದಿ ಇತರೆ/08–09. ದಿನಾಂಕ: 03–06–2009.
2) ತಜ್ಞರ ಸಮಿತಿಯ ವರದಿ ಸಂಖ್ಯೆ. ಸಿ1(4) ಹಿಂದಿ.ಬಿಇಡಿ ಬಗ್ಗೆ/28/08–09, ದಿನಾಂಕ:25–02–2009.
3) ಸರ್ಕಾರದ ಆದೇಶ ಸಂಖ್ಯೆ. ಸಿಆಸುಇ 59 ಎಸ್‌ಆರ್‌ಇ 2002, ದಿನಾಂಕ:24–06–2003.
4) ಸರ್ಕಾರದ ಆದೇಶ ಸಂಖ್ಯೆ. ಇಡಿ 125 ಪಿಟಿಐ 2003, ದಿನಾಂಕ:16–08–2003.

**ಪ್ರಸ್ತಾವನೆ :**

01] ಕರ್ನಾಟಕ ಲೋಕ ಸೇವಾ ಆಯೋಗವು ಡಿಸೆಂಬರ್ 2006 ರಲ್ಲಿ ಪ್ರೌಢಶಾಲಾ ಮುಖ್ಯ ಶಿಕ್ಷಕರ(ವೃಂದ–ಬಿ) 558 ಹುದ್ದೆಗಳ ನೇರ ನೇಮಕಾತಿಗೆ ಅರ್ಜಿಯನ್ನು ಆಹ್ವಾನಿಸಿದ್ದು, ಕೆಳಕಂಡ ಶೈಕ್ಷಣಿಕ ವಿದ್ಯಾರ್ಹತೆಯನ್ನು ನಿಗದಿಪಡಿಸಿದೆ.

[ಅ] " ಅಂಗೀಕೃತ ವಿಶ್ವವಿದ್ಯಾಲಯದ ಪದವಿ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು. ಅಥವಾ ಸರ್ಕಾರವು ಅಂತಹ ಪರೀಕ್ಷೆಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಹೊಂದಿರಬೇಕು ಮತ್ತು

[ಬಿ] ಅಂಗೀಕೃತ ವಿಶ್ವವಿದ್ಯಾಲಯದ ಶಿಕ್ಷಣ ಪದವಿ[ಬಿ.ಇಡಿ.] ಅಥವಾ ಸರ್ಕಾರವು ಅಂತಹ ಪದವಿಗೆ ಸಮಾನವೆಂದು ಅಂಗೀಕರಿಸಿದ ವಿದ್ಯಾರ್ಹತೆಯನ್ನು ಹೊಂದಿರಬೇಕು.

02] ಮೇಲ್ಕಂಡ ನಿಯಮಗಳನ್ವಯ ಹಿಂದಿ ಶಿಕ್ಷಕ್, ಶಿಕ್ಷಣ ಪಾರಂಗತ್ ಹಾಗೂ ಶಿಕ್ಷಾ ಸ್ನಾತಕ್ ಪದವಿ ಹೊಂದಿರುವ ಅಭ್ಯರ್ಥಿಗಳು ಮೇಲ್ಕಂಡ ಹುದ್ದೆಗಳಿಗೆ ಅರ್ಜಿ ಸಲ್ಲಿಸಿ ಜುಲೈ 07 ರಂದು ಕರ್ನಾಟಕ ಲೋಕಸೇವಾ ಆಯೋಗದಿಂದ ನಡೆದಿರುವ ಪೂರ್ವಭಾವಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ ಮುಖ್ಯ ಪರೀಕ್ಷೆಗೆ ಅರ್ಹತೆ ಪಡೆದಿರುತ್ತಾರೆ. ಕರ್ನಾಟಕ ಲೋಕಸೇವಾ ಆಯೋಗವು ಮುಖ್ಯ ಪರೀಕ್ಷೆಗೆ ಅರ್ಹತೆ ಪಡೆದ ಹಿಂದಿ ಬಿ.ಇಡಿ., ಪದವೀಧರರಿಗೆ ಸೂಕ್ತ ವಿದ್ಯಾರ್ಹತೆ ಹೊಂದಿಲ್ಲ ಎಂಬ ಕಾರಣ ನೀಡಿ, ಅರ್ಜಿಗಳನ್ನು ತಿರಸ್ಕರಿಸಿದೆ. ಬಾಧಿತ ಅಭ್ಯರ್ಥಿಗಳು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅಪೀಲು ಸಂಖ್ಯೆ. 1822/2008 [ಹಾಗೂ ಇತರೆ] ನ್ನು ಸಲ್ಲಿಸಿ, ದಿನಾಂಕ:17–04–2008ರ ಮಾನ್ಯ ನ್ಯಾಯಾಲಯದ ಮಧ್ಯಂತರ ಆದೇಶದನ್ವಯ ಮುಖ್ಯ ಪರೀಕ್ಷೆಯನ್ನು ಬರೆದಿರುತ್ತಾರೆ.

03] ಕರ್ನಾಟಕ ಲೋಕಸೇವಾ ಆಯೋಗದ ಮೇಲ್ಕಂಡ ನಿರ್ಧಾರದಿಂದ ಬಾಧಿತರಾದ ಅಭ್ಯರ್ಥಿಗಳು ಸರ್ಕಾರಕ್ಕೆ ಅರ್ಜಿಯನ್ನು ಸಲ್ಲಿಸಿ, ಹಿಂದಿ ಶಿಕ್ಷಕ್, ಶಿಕ್ಷಣ ಪಾರಂಗತ್ ಹಾಗೂ ಶಿಕ್ಷಾ ಸ್ನಾತಕ್ ಪದವಿಗಳನ್ನು ಬಿ.ಇಡಿ.,ಗೆ ತತ್ಸಮಾನವೆಂದು ಪರಿಗಣಿಸಿ, ಆದೇಶ ಹೊರಡಿಸಲು ಮನವಿ ಸಲ್ಲಿಸಿರುತ್ತಾರೆ. ಈ ಬಗ್ಗೆ ಪರಿಶೀಲಿಸಲು, ನಿರ್ದೇಶಕರು, ಪ್ರೌಢ ಶಿಕ್ಷಣ, ಸಾರ್ವಜನಿಕ ಶಿಕ್ಷಣ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ:25–02–2009 ರಂದು ತಜ್ಞರ ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯು ದಿನಾಂಕ:05–05–2009 ರಂದು ವರದಿಯನ್ನು ನೀಡಿದೆ. ವರದಿಯ ಮುಖ್ಯಾಂಶಗಳು ಕೆಳಕಂಡಂತಿದೆ.

04] ಮುಖ್ಯ ಶಿಕ್ಷಕರ ಹುದ್ದೆಗೆ ಕೆಳಕಂಡ ವಿದ್ಯಾರ್ಹತೆ ಇರುತ್ತದೆ.

| ಕ್ರಮ ಸಂಖ್ಯೆ | 1967ರ ವೃಂದ ಮತ್ತು ನೇಮಕಾತಿ ನಿಯಮಗಳು | 2006ರ ವೃಂದ ಮತ್ತು ನೇಮಕಾತಿ ನಿಯಮಗಳು |
|---|---|---|
| | ***For Direct Recruitment:-***<br>*1. Qualifications as prescribed in the Mysore Recruitment of Gazetted Probationers [ Class-1 & II posts appointment by competitive Examinations] Rules 1966.*<br>*2. Should pass the following departmental Examinations within the period of probation:-*<br>*(a) General law paper 1 & II*<br>*(b) Accounts Higher*<br>*Probation:- Two years*<br>***For Promotion:-***<br>*1. B.T. or B.Ed or an equivalent degree of a recognized University.*<br>*2. Minimum service of two years in the cadre of Secondary Schools Asst. [Grade-1]*<br>*Should have passed the following departmental Examinations:-*<br>*(a) General law paper 1 & II*<br>*(b) Accounts Higher* | ***For Direct Recruitment:-***<br>*1. Must be a holder of a degree of University established by law in India or equivalent qualification and*<br>*2. Must be holder of a degree in Education of a University established by law in India or equivalent qualification.* |

05] ಸರ್ಕಾರದ ಆದೇಶ ಸಂಖ್ಯೆ. ಡಿಪಿಎಆರ್ 59 ಎಸ್ಆರ್ಇ 2002, ದಿನಾಂಕ:24.06.2003 ರನ್ವಯ ಸರ್ಕಾರಿ ಪ್ರೌಢಶಾಲಾ ಭಾಷಾ ಶಿಕ್ಷಕರ ಹುದ್ದೆಗೆ ಈ ಕೆಳಕಂಡ ವಿದ್ಯಾರ್ಹತೆಯನ್ನು ಪಾಲಿಸಲಾಗುತ್ತಿದೆ.

*(a) Must be a holder of a Bachelor Degree in Arts with the concerned language as one of the optional subjects namely:- Kannada, English, Urdu, Hindi, Marati, Telugu, Tamil and Sanskrit or 4 years language Pandith Course in Kannada, Vidwan in Sanskrit and Urdu Munshi Examination conducted by the Karnataka Secondary Education Examination Board.*

*AND*

*(b) Must be a holder of a Degree in Education.*

*Provided further that in case of Language Assistants in Hindi a candidate:-*

*(i) Who has passed Rastrabasha Praveen and Shiksha Snatak [with Hindi and one other language as teaching method] courses conducted by the Dakshina Bharatha Hindi prachara sabha and Pre-University Course with Kannada or any other regional Language as one of the subjects or with Kannada or any other regional language as medium of instructions at P.U.C.level.*

*(ii) Who Possesses any other qualification as may be declared equivalent by the State Government.*

06] ಶಿಕ್ಷಾ ಪಾರಂಗತ್ ಹಾಗೂ ಹಿಂದಿ ಶಿಕ್ಷಕ್ ವಿದ್ಯಾರ್ಹತೆಯನ್ನು ಸರ್ಕಾರದ ಆದೇಶ ದಿನಾಂಕ:16–08–2003 ರನ್ವಯ ಬಿ.ಇಡಿ., ಪದವಿಗೆ ತತ್ಸಮಾನವೆಂದು ಪರಿಗಣಿಸುವುದರ ಜೊತೆಗೆ, ಈ ಪದವಿಗಳನ್ನು ಮಾಡುವ ಮುನ್ನ ಪದವಿ ಪೂರ್ವ ತರಗತಿಯಲ್ಲಿ ತೇರ್ಗಡೆಯಾಗಿರಬೇಕು. ಜೊತೆಗೆ ಬಿ.ಇಡಿ., ಪದವಿಯಲ್ಲಿ ಒಂದು ಪ್ರಾಂತೀಯ ಭಾಷೆಯನ್ನು ಮತ್ತು ಹಿಂದಿ ಭಾಷೆಯನ್ನು ಅಭ್ಯಾಸ ಮಾಡಿರಬೇಕೆಂದಿದೆ; ಶಿಕ್ಷಾ ಸ್ನಾತಕ್, ಶಿಕ್ಷಾ ಪಾರಂಗತ್ ಹಾಗೂ ಹಿಂದಿ ಶಿಕ್ಷಕ್ ವಿದ್ಯಾರ್ಹತೆಯನ್ನು ಬಿ.ಇಡಿ., ಪದವಿಗೆ ತತ್ಸಮಾನವೆಂದು, ಸರ್ಕಾರವು ಘೋಷಿಸಿರುವ ಹಿನ್ನಲೆಯಲ್ಲಿ ಈ ವಿದ್ಯಾರ್ಹತೆಯನ್ನು ಪ್ರೌಢಶಾಲಾ ಶಿಕ್ಷಕರ ನೇರ ನೇಮಕಾತಿಗಾಗಿ ಮತ್ತು ಬಡ್ತಿಗಾಗಿಯೂ ಸಹ ಪರಿಗಣಿಸಲಾಗುತ್ತಿದೆ. ಮೇಲ್ಕಂಡ ವಿದ್ಯಾರ್ಹತೆಯನ್ನು ಹೊಂದಿರುವ ಅಭ್ಯರ್ಥಿಗಳನ್ನು ಹಿಂದಿ ಭಾಷಾ ಶಿಕ್ಷಕರ ಹುದ್ದೆಗಳ ನೇರ ನೇಮಕಾತಿಗಾಗಿ ಆಯ್ಕೆ ಮಾಡಲಾಗುತ್ತಿದೆ. ಅಲ್ಲದೆ ಇವರನ್ನು ಇದೇ ವಿದ್ಯಾರ್ಹತೆ ಮತ್ತು ಸೇವಾ ಜೇಷ್ಠತೆಯ ಆಧಾರದ ಮೇಲೆ ಪ್ರೌಢಶಾಲಾ ಶಿಕ್ಷಕರ ಹುದ್ದೆಗಳಿಂದ, ಮುಖ್ಯ ಶಿಕ್ಷಕರ ಹುದ್ದೆಗಳಿಗೆ ಬಡ್ತಿಯನ್ನೂ ಸಹ ನೀಡಲಾಗುತ್ತಿರುವುದರಿಂದ, ಮುಖ್ಯ ಶಿಕ್ಷಕರ ನೇರ ನೇಮಕಾತಿಗಾಗಿಯೂ ಸಹ ಇದೇ ವಿದ್ಯಾರ್ಹತೆಯನ್ನು, ಪದವಿ ಪೂರ್ವ ತರಗತಿಯಲ್ಲಿ ಕನ್ನಡವನ್ನು ಅಭ್ಯಾಸ ಮಾಡಿರಬೇಕು ಎಂಬ ಷರತ್ತನ್ನು ವಿಧಿಸಿ, ಪರಿಗಣಿಸಬಹುದಾಗಿದೆಯೆಂದು ತಜ್ಞರ ಸಮಿತಿಯು ಮೇಲೆ (2) ರಲ್ಲಿ ಓದಲಾದ ವರದಿಯಲ್ಲಿ ಅಭಿಪ್ರಾಯ ನೀಡಿದೆ.

07] ತಜ್ಞರ ಸಮಿತಿಯ ವರದಿಯನ್ನು ಹಾಗೂ ಮೇಲೆ (3) ಮತ್ತು (4) ರಲ್ಲಿ ಓದಲಾದ ಆದೇಶಗಳ ಹಿನ್ನಲೆಯಲ್ಲಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 99 ಡಿಜಿಓ 2008, ಬೆಂಗಳೂರು, ದಿನಾಂಕ 28ನೇ ಜುಲೈ 2009.**

08] ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರದ ಆದೇಶ ಸಂಖ್ಯೆ. ಡಿಪಿಎಆರ್ 59 ಎಸ್‌ಆರ್‌ಇ 2002, ದಿನಾಂಕ: 24–06–2003 ರಲ್ಲಿ ಹಾಗೂ ಸರ್ಕಾರದ ಆದೇಶ ಸಂಖ್ಯೆ. ಇಡಿ 125 ಪಿಟಿಐ 2003, ದಿನಾಂಕ:16–08–2003 ರಲ್ಲಿ ನಿಗದಿಪಡಿಸಲಾದ ಶಿಕ್ಷಾ ಸ್ನಾತಕ್, ಹಿಂದಿ ಶಿಕ್ಷಕ್ ಮತ್ತು ಹಿಂದಿ ಶಿಕ್ಷಣ ಪಾರಂಗತ್ ಹಿಂದಿ ಬಿ.ಇಡಿ., ಪದವಿಗಳನ್ನು, ಪದವಿ ಪೂರ್ವ ತರಗತಿಯಲ್ಲಿ ಕನ್ನಡವನ್ನು ಅಭ್ಯಾಸ ಮಾಡಿರಬೇಕು ಎಂಬ ಷರತ್ತಿಗೊಳಪಟ್ಟು ಸಾಮಾನ್ಯ ಬಿ.ಇಡಿ. ಪದವಿಗಳಿಗೆ, ತತ್ಸಮಾನ ಪದವಿಗಳೆಂದು ಪರಿಗಣಿಸಿ, ಈ ಪದವಿಗಳ ವಿದ್ಯಾರ್ಹತೆಯನ್ನು 2007 ಮತ್ತು 2008 ರಲ್ಲಿ ಕರ್ನಾಟಕ ಲೋಕಸೇವಾ ಆಯೋಗವು ನಡೆಸಿರುವ ಸರ್ಕಾರಿ ಪ್ರೌಢಶಾಲಾ ಮುಖ್ಯ ಶಿಕ್ಷಕರ ನೇರ ನೇಮಕಾತಿ ಪರೀಕ್ಷೆಗಳಿಗೂ ಸಹ ಅರ್ಹ ವಿದ್ಯಾರ್ಹತೆಯಾಗಿ ಅನ್ವಯವಾಗುತ್ತದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಟಿ. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ

ಶಿಕ್ಷಣ ಇಲಾಖೆ (ಪ್ರೌಢ)

# ವಿಶೇಷ ಪತ್ರಿಕೆ


| | | |
|---|---|---|
| ಭಾಗ – I | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೦ |


**ಕರ್ನಾಟಕ ಸರ್ಕಾರದ ನಡವಳಿಗಳು**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಆರ್.ಮಂಜುನಾಥ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ಪುರಂ, ಬೆಂಗಳೂರು ನಗರ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :** 1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ /ಬೆಂನ/ 09/2005–06 ದಿನಾಂಕ: 24/06/2005

2) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಆದೇಶ ಸಂಖ್ಯೆ: ಡಿಪಿಜಿ /ಬೆಂನ/ 09/2005–06 ದಿನಾಂಕ: 07/11/2005 ಮತ್ತು 02/03/2006
3) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 05/09/2007
4) ಪತ್ರಿಕಾ ಪ್ರಕಟಣೆ ದಿನಾಂಕ: 27/10/2007
5) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ /ಬೆಂನ/ 09/2005–06 ದಿನಾಂಕ: 08/04/2008.

**ಪ್ರಸ್ತಾವನೆ :**

ಡಾ: ಆರ್.ಮಂಜುನಾಥ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ಪುರಂ, ಬೆಂಗಳೂರು ನಗರ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಸಮಯದಲ್ಲಿ ದಿನಾಂಕ: 04/11/2004 ರಿಂದ 30/12/2004 ರ ವರೆಗೆ ಸಂಯುಕ್ತ ರಜೆ ಪಡೆದು, ನಂತರ ದಿನಾಂಕ: 31/12/2004 ರಿಂದ ಇಲ್ಲಿಯವರೆವಿಗೂ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಸದರಿ ವೈದ್ಯರಿಗೆ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಮೇಲೆ (1) ರಲ್ಲಿ ಓದಲಾದ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿ ಅವರಿಂದ ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು. ಸದರಿ ನೋಟೀಸಿಗೆ ಆರೋಪಿತ ಅಧಿಕಾರಿಯು ನಿಗದಿತ ಅವಧಿಯಲ್ಲಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿರುವುದಿಲ್ಲವಾದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯುವ ಸಲುವಾಗಿ ಮೇಲೆ (2) ರಲ್ಲಿ ಓದಲಾದ ಆದೇಶ ದಿನಾಂಕ: 02/03/2006 ರಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ, ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಸಲ್ಲಿಸುವಂತೆ ನಿರ್ದೇಶಿಸಿದ್ದರು.

ಮೇಲೆ (3) ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ಆಯುಕ್ತರಿಗೆ ದಿನಾಂಕ: 05/09/2007 ರಂದು ಸಲ್ಲಿಸಿದ್ದಾರೆ. ಸದರಿ ವಿಚಾರಣಾ ವರದಿಯಲ್ಲಿ ಆರೋಪಿತ ಅಧಿಕಾರಿಗೆ ಇಲಾಖಾ ವಿಚಾರಣೆಗೆ ಹಾಜರಾಗಲು ವಿಚಾರಣಾಧಿಕಾರಿಗಳು ನೋಟೀಸನ್ನು ಜಾರಿಗೊಳಿಸಿದ್ದರೂ ಸಹ ಸದರಿ ಅಧಿಕಾರಿಯು ವಿಚಾರಣೆಗೆ ಹಾಜರಾಗದೆ ಇದ್ದುದ್ದರಿಂದ ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಿ, ಸಾಕ್ಷಿದಾರರ ಸಾಕ್ಷ್ಯ ಮಂಡನಾಧಿಕಾರಿಗಳ ವಾದ ಮಂಡನೆಯೊಂದಿಗೆ ವಿಚಾರಣೆಯನ್ನು ನಡೆಸಿ, ಇವರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪವು ನಿಸ್ಸಂಶಯವಾಗಿ ರುಜುವಾತಾಗಿದೆ ಎಂಬ ವರದಿಯನ್ನು ನೀಡಿರುತ್ತಾರೆ.

ಸದರಿ ವೈದ್ಯಾಧಿಕಾರಿಯು ಸರ್ಕಾರದ ಪತ್ರಗಳಿಗೆ ಯಾವುದೇ ಪ್ರತ್ಯುತ್ತರ ನೀಡದೆ ಇರುವುದರಿಂದ ಹಾಗು ವೈದ್ಯರ ಸ್ವ–ವಿಳಾಸಕ್ಕೆ ಕಳುಹಿಸಿರುವ ಪತ್ರಗಳು ಜಾರಿಯಾಗದೆ ಎಲ್ಲಾ ಪತ್ರಗಳು ವಿಳಾಸದಲ್ಲಿ ಇಲ್ಲವೆಂದು ಹಿಂದಿರುಗಿ ಬಂದಿರುವುದರಿಂದ ಹಾಗೂ ಆರೋಪಿತ ವೈದ್ಯರು ಇಲಾಖಾ ವಿಚಾರಣೆಗೂ ಸಹ ಸ್ಪಂದಿಸದೆ ಇರುವ ಕಾರಣ ಮೇಲೆ (4) ರ ಡೆಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಜಾಹೀರಾತು ಪ್ರಕಟಗೊಳಿಸಿದ್ದು, ಆಪಾದಿತ ವೈದ್ಯರು ಅದಕ್ಕೂ ಸಹ ಪ್ರತಿಕ್ರಿಯಿಸಿರುವುದಿಲ್ಲ.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯಾಧಿಕಾರಿಯು ವಿಚಾರಣೆಗೆ ಹಾಜರಾಗದೆ ಕರ್ತವ್ಯಕ್ಕೆ ಮರಳದೆ ಹಾಗೂ ವೈದ್ಯರ ಸ್ವ–ವಿಳಾಸಕ್ಕೆ ಕಳುಹಿಸಿದ್ದ ನೋಟೀಸ್ ಜಾರಿಯಾಗದೆ ವಿಳಾಸದಲ್ಲಿ ಅಧಿಕಾರಿಯು ಇಲ್ಲದೆ ಹಿಂದಿರುಗಿ ಬಂದಿದೆ ಎಂದು, ಹಾಗು ಪತ್ರಿಕಾ ಪ್ರಕಟಣೆಗೂ ಸಹ ಸ್ಪಂದಿಸದೆ ಇರುವುದರಿಂದ ಮುಂದಿನ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಇವರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ಸಕ್ಷಮ ಪ್ರಾಧಿಕಾರದಿಂದ ಪೂರ್ವಾನುಮತಿಯನ್ನು ಪಡೆಯದೆ ಅಥವಾ ರಜೆ ಮಂಜೂರಾತಿ ಇಲ್ಲದೆ ದಿನಾಂಕ: 04/11/2004 ರಿಂದ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ಕಂಡು ಬರುತ್ತದೆ. ಇದರಿಂದಾಗಿ ಸಾರ್ವಜನಿಕ ಸೇವೆಗೆ ತೊಂದರೆಯಾಗಿರುತ್ತದೆ. ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗು ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಟ್ಟಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ : ಆಕುಕ 179 ಎಂಎಸ್‌ಎ 2008, ಬೆಂಗಳೂರು, ದಿನಾಂಕ : 18/ 08/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ: ಆರ್.ಮಂಜುನಾಥ್, ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ಪುರಂ, ಬೆಂಗಳೂರು ನಗರ ಜಿಲ್ಲೆ ಇವರು ಸರ್ಕಾರಿ ಸೇವೆಗೆ ದಿನಾಂಕ: 04/11/2004 ರಿಂದ ಅನಧಿಕೃತ

ಗೈರುಹಾಜರಾಗಿರುವುದರಿಂದ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಶುಕ್ರವಾರ, ಸೆಪ್ಟೆಂಬರ್ ೨, ೨೦೦೯ (ಭಾದ್ರಪದ ೨೦, ಶಕ ವರ್ಷ ೧೯೩೧) | ನಂ. ೮೨೧ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ: ಸಿ.ಕೆ. ಬಾಲಕೃಷ್ಣ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದಿಬ್ಬೂರು, ಕೋಲಾರ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ (1) ಕೋಲಾರ – II / 04–05 ದಿನಾಂಕ: 19/05/2004
2) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರಿಕಾ ಪ್ರಕಟಣೆ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05 ದಿನಾಂಕ: 20/09/2004
3) ವೈದ್ಯರು ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿ ಸಲ್ಲಿಸಿರುವ ದಿನಾಂಕ: 26/12/2005 ರ ಪತ್ರ
4) ಕರ್ತವ್ಯಕ್ಕೆ ಹಾಜರಾಗಲು ಹೊರಡಿಸಿದ ದಿನಾಂಕ: 15/04/2006 ರ ಅಧಿಸೂಚನೆ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05
5) ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05 ದಿನಾಂಕ: 19/10/2006 ರ ಪತ್ರಿಕಾ ಪ್ರಕರಣೆ.
6) ವೈದ್ಯಾಧಿಕಾರಿಗಳ ರಕ್ಷಣಾ ಹೇಳಿಕೆ ದಿನಾಂಕ: 04/11/2006
7) ಕರ್ತವ್ಯಕ್ಕೆ ಹಾಜರಾಗಲು ಹೊರಡಿಸಿದ ದಿನಾಂಕ: 13/01/2007 ರ ಅಧಿಸೂಚನೆ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05 ದಿನಾಂಕ: 20/09/2004
8) ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಿ ಹೊರಡಿಸಿದ ದಿನಾಂಕ: 21/05/2007 ರ ಆದೇಶ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05
9) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ: ಮುಜಾಅ / ಜಾಕೋ/ 5/2007–08 ದಿನಾಂಕ: 26/09/2008
10) 2ನೇ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05 ದಿನಾಂಕ: 07/11/2008
11) ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ (1) ಕೋಲಾರ– II / 04–05 ದಿನಾಂಕ: 27/01/2009

**ಪ್ರಸ್ತಾವನೆ :**

ಡಾ: ಸಿ.ಕೆ. ಬಾಲಕೃಷ್ಣ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದಿಬ್ಬೂರು, ಕೋಲಾರ ಜಿಲ್ಲೆ ಇವರು ದಿನಾಂಕ: 03/09/2003 ರಿಂದ 31/10/2003 ರ ವರೆಗೆ ರಜೆ ಮೇಲೆ ತೆರಳಿದ್ದು, ದಿನಾಂಕ: 01/11/2003 ರಂದು ಕರ್ತವ್ಯಕ್ಕೆ ಹಾಜರಾಗಬೇಕಾಗಿದ್ದು, ಕರ್ತವ್ಯಕ್ಕೆ ಹಾಜರಾಗದೆ ದಿನಾಂಕ: 01/01/2004 ರಂದು ಕರ್ತವ್ಯಕ್ಕೆ ಹಾಜರಾಗಿ, ಪುನ: ದಿನಾಂಕ: 02/01/2004 ರಿಂದ ಇಲ್ಲಿಯವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ

ಕಲ್ಯಾಣ ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯರಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ಕೋರಲಾಗಿತ್ತು.

ಆದರೆ ಆರೋಪಿತ ಅಧಿಕಾರಿಯು ದೋಷಾರೋಪಣಾ ಪಟ್ಟಿಗೆ ಸಂಬಂಧಿಸಿದಂತೆ, ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸದೆ ಕರ್ತವ್ಯಕ್ಕೆ ಹಾಜರಾಗದ ಕಾರಣ ಮೇಲೆ (2) ರಲ್ಲಿ ಓದಲಾದ ಪತ್ರಿಕಾ ಪ್ರಕಟಣೆಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ತಿಳಿಸಲಾಗಿತ್ತು. ಮೇಲೆ (3) ರಲ್ಲಿ ವೈದ್ಯಾಧಿಕಾರಿಗಳು ತಮ್ಮ ಮನವಿಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ಕೋರಿದ್ದು, ಮೇಲೆ (4) ರ ಅಧಿಸೂಚನೆಯಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು ಆರೋಪಿತ ವೈದ್ಯರಿಗೆ ಕರ್ತವ್ಯಕ್ಕೆ ಹಾಜರಾಗಲು ಅನುಮತಿ ನೀಡಲಾಗಿತ್ತು.

ಆದಾಗ್ಯೂ ಸದರಿ ವೈದ್ಯರು ಕರ್ತವ್ಯಕ್ಕೆ ಹಾಜರಾಗದೆ ಹಾಗು ಅನುಮತಿ ನೀಡಿದ ಪತ್ರವು ವೈದ್ಯಾಧಿಕಾರಿಗಳು ಆ ವಿಳಾಸದಲ್ಲಿ ಇರುವುದಿಲ್ಲವೆಂದು ಲಕೋಟೆಯು ಹಿಂದಿರುಗಿದ ಕಾರಣ ಮೇಲೆ (5) ರಲ್ಲಿ ಕರ್ತವ್ಯಕ್ಕೆ ಹಾಜರಾಗಲು ಮತ್ತೊಮ್ಮೆ ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಮೇಲೆ (6) ರಲ್ಲಿನ ವೈದ್ಯಾಧಿಕಾರಿಗಳ ಮನವಿಯಲ್ಲಿ ಕರ್ತವ್ಯಕ್ಕೆ ಹಾಜರಾಗಲು ಮತ್ತೊಮ್ಮೆ ಅನುಮತಿ ಕೋರಿದ್ದು, ಮೇಲೆ (7) ರ ಅಧಿಸೂಚನೆಯಲ್ಲಿ ಅನುಮತಿಸಲಾಗಿತ್ತು. ಆದಾಗ್ಯೂ ಸದರಿ ವೈದ್ಯರು ನೇಮಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದ ಕಾರಣ, ಈ ಪ್ರಕರಣದ ಕುರಿತು ವಿಚಾರಣೆ ನಡೆಸಲು ಮೇಲೆ (8) ರಲ್ಲಿನ ಆದೇಶದಲ್ಲಿ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸಿದ್ದು, ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ಆರೋಪ ಸಾಬೀತಾಗಿರುವುದಾಗಿ ಮೇಲೆ (9) ರಲ್ಲಿ ವಿಚಾರಣಾ ವರದಿಯನ್ನು ನೀಡಿರುತ್ತಾರೆ.

ಸದರಿ ವರದಿಯೊಂದಿಗೆ 2ನೇ ತಿಳುವಳಿಕೆ ಪತ್ರವನ್ನು ಮೇಲೆ (10) ರಲ್ಲಿ ಸದರಿ ವೈದ್ಯರಿಗೆ ಜಾರಿಗೊಳಿಸಲಾಗಿದ್ದು, ಈವರೆವಿಗೂ ಯಾವುದೇ ಉತ್ತರ ಸದರಿ ವೈದ್ಯರಿಂದ ಸ್ವೀಕೃತಗೊಂಡಿರುವುದಿಲ್ಲ.

ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಮೇಲೆ (11)ರ ತಮ್ಮ ಪತ್ರದಲ್ಲಿ ಡಾ:ಸಿ.ಕೆ.ಬಾಲಕೃಷ್ಣ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದಿಬ್ಬೂರು, ಕೋಲಾರ ಜಿಲ್ಲೆ ಇವರು ದಿನಾಂಕ: 03/09/2003 ರಿಂದ 31/10/2003 ರ ವರೆಗೆ ರಜೆ ಮೇಲೆ ತೆರಳಿ, ರಜೆ ಮುಗಿದ ನಂತರ ದಿನಾಂಕ: 01/01/2004 ರಂದು ಕರ್ತವ್ಯಕ್ಕೆ ಹಾಜರಾಗಿ, ಪುನ: ದಿನಾಂಕ: 02/01/2004 ರಿಂದ ಇಲ್ಲಿಯವರೆಗೆ ಅನಧಿಕೃತ ಗೈರುಹಾಜರಾಗಿದ್ದು, ಈ ಸಂಬಂಧ ನೋಟೀಸ್ ಜಾರಿ ಮಾಡಲಾಗಿ ಅದಕ್ಕೂ ಉತ್ತರ ನೀಡದೆ ಹಾಗು ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೆ ಇರುವುದರಿಂದ ಮತ್ತು ಇವರ ಖಾಯಂ ಪೂರ್ವ ಸೇವಾವಧಿಯಲ್ಲಿಯೇ ಅನಧಿಕೃತ ಗೈರುಹಾಜರಿಯಾಗಿರುವುದರಿಂದ ಈ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದಾರೆ.

ಸರ್ಕಾರವು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಆಪಾದಿತ ವೈದ್ಯರು ದಿನಾಂಕ: 03/09/2003 ರಿಂದ 31/10/2003 ರ ವರೆಗೆ ರಜೆ ಮೇಲೆ ತೆರಳಿ, ರಜೆ ಮುಗಿದ ನಂತರ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅಥವಾ ರಜೆ ಮಂಜೂರಾತಿ ಇಲ್ಲದೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು, ನೋಟೀಸಿಗೂ ಮತ್ತು ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೆ ಇರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗು ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 42 ಎಂಎಸ್ಎ 2009, ಬೆಂಗಳೂರು, ದಿನಾಂಕ : 18/ 08/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ:ಸಿ.ಕೆ.ಬಾಲಕೃಷ್ಣ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ದಿಬ್ಬೂರು, ಕೋಲಾರ ಜಿಲ್ಲೆ ಇವರು ಸರ್ಕಾರಿ ಸೇವೆಗೆ ದಿನಾಂಕ: 02/01/2004 ರಿಂದ ಇಲ್ಲಿಯವರೆವಿಗೂ ಗೈರುಹಾಜರಾಗಿರುವುದರಿಂದ, ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

| ಭಾಗ – I | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೨ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ:ಎಸ್.ವೆಂಕಟಲಕ್ಷ್ಮಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಂಗೇನಹಳ್ಳಿ, ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರ ಅನಧಿಕೃತ ಗೈರುಹಾಜರಿ ಸಂಬಂಧ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ :**

1) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಕಾರಣ ಕೇಳುವ ನೋಟೀಸ್ ಸಂಖ್ಯೆ: ಡಿಪಿಜಿ / ಬೆವಿ– II / ಚಿ/ 24/05–06 ದಿನಾಂಕ: 20/03/2007.
2) ಪತ್ರಿಕಾ ಪ್ರಕಟಣೆ ದಿನಾಂಕ: 21/05/2007
3) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಆದೇಶ ಸಂಖ್ಯೆ: ಡಿಪಿಜಿ / ಬೆವಿ– II / ಚಿ/ 24/05–06 ದಿನಾಂಕ: 07/08/2007.
4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ: ಮುಜಾಅ/ ಜಾಕೋ/ 17/ 2007–08 ದಿನಾಂಕ: 25/08/2008
5) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ತಿಳುವಳಿಕೆ ಪತ್ರ ಸಂಖ್ಯೆ: ಡಿಪಿಜಿ / ಬೆವಿ– II / ಚಿ/ 24/05–06 ದಿನಾಂಕ: 18/09/2008
6) ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರ ಪತ್ರ ಸಂಖ್ಯೆ: ಡಿಪಿಜಿ / ಬೆವಿ– II / ಚಿ/ 24/05–06 ದಿನಾಂಕ: 16/03/2009

**ಪ್ರಸ್ತಾವನೆ :**

ಡಾ:ಎಸ್.ವೆಂಕಟಲಕ್ಷ್ಮಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಂಗೇನಹಳ್ಳಿ, ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ದಿನಾಂಕ: 06/09/2004 ರಿಂದ 30/09/2004 ರ ವರೆಗೆ ರಜೆ ಪಡೆದು, ರಜೆ ಮುಗಿದ ನಂತರ ದಿನಾಂಕ: 01/10/2004 ರಿಂದ ಕರ್ತವ್ಯಕ್ಕೆ ಹಾಜರಾಗದೆ ಸೇವೆಗೆ ಅನಧಿಕೃತ ಗೈರುಹಾಜರಾಗಿರುವ ಆರೋಪಕ್ಕೆ ಸಂಬಂಧಿಸಿದಂತೆ, ಸದರಿ ವೈದ್ಯಾಧಿಕಾರಿಗಳ ವಿರುದ್ಧ ಶಿಸ್ತುಕ್ರಮ ಜರುಗಿಸುವ ಸಲುವಾಗಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ರವರು, ಮೇಲೆ (1) ರಲ್ಲಿ ಓದಲಾದ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಜಾರಿ ಮಾಡಿ, ರಕ್ಷಣಾ ಹೇಳಿಕೆಯನ್ನು ಸಲ್ಲಿಸುವಂತೆ ಸೂಚಿಸಲಾಗಿತ್ತು.

ಸದರಿ ನೋಟೀಸಿಗೆ ನಿಗದಿತ ಅವಧಿಯಲ್ಲಿ ಆರೋಪಿತ ಅಧಿಕಾರಿಗಳು ರಕ್ಷಣಾ ಹೇಳಿಕೆ ಸಲ್ಲಿಸಿರುವುದಿಲ್ಲ. ಆ ನಂತರ ಮೇಲೆ (2) ರ ಓದಲಾದ ದಿನಾಂಕ: 15/05/2007 ರಲ್ಲಿ ಪತ್ರಿಕಾ ಪ್ರಕಟಣೆ ನೀಡಲಾಗಿತ್ತು. ಆದಾಗ್ಯೂ ವೈದ್ಯರು ಕರ್ತವ್ಯಕ್ಕೆ ಮರಳಿ ಹಾಜರಾಗಿರುವುದಿಲ್ಲ.

ಮೇಲಿನ ಪತ್ರಿಕಾ ಪ್ರಕಟಣೆಗೂ ಸಹ ಆರೋಪಿತ ಅಧಿಕಾರಿಯು ಪ್ರತಿಕ್ರಿಯಿಸಿಲ್ಲವಾದ ಕಾರಣ ಹಾಗು ರಕ್ಷಣಾ ಹೇಳಿಕೆಯನ್ನು ಸಲ್ಲಿಸದ ಕಾರಣ, ಈ ಸಂಬಂಧ ಪ್ರಕರಣದ ಸತ್ಯಾಸತ್ಯತೆಯನ್ನು ತಿಳಿಯಲು ಮೇಲೆ (3) ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ, ಈ ಸಂಬಂಧ ಆರೋಪಿತರ ವಿರುದ್ಧ ವಿಚಾರಣೆ ನಡೆಸಿ, ವಿಚಾರಣಾ ವರದಿಯನ್ನು ನೀಡುವಂತೆ ನಿರ್ದೇಶನ ನೀಡಿದ್ದರು.

ಮೇಲೆ (4)ರ ಓದಲಾದ ವಿಚಾರಣಾಧಿಕಾರಿಗಳು, ವಿಚಾರಣೆ ನಡೆಸಿ, ವರದಿಯನ್ನು ದಿನಾಂಕ: 25/05/2008 ರಂದು ಆಯುಕ್ತರಿಗೆ ಸಲ್ಲಿಸಿದ್ದು, ಸದರಿ ವಿಚಾರಣಾ ವರದಿಯಲ್ಲಿ ಅಧಿಕಾರಿಯು ವಿಚಾರಣೆಗೆ ಹಾಜರಾಗದೆ ಇದ್ದುದ್ದರಿಂದ ವಿಚಾರಣೆಯನ್ನು ಏಕಪಕ್ಷೀಯವಾಗಿ ನಡೆಸಿ, ಸಾಕ್ಷಿದಾರರ ಸಾಕ್ಷಿ ಮಂಡನಾಧಿಕಾರಿಗಳ ವಾದ ಮಂಡನೆಯೊಂದಿಗೆ ವಿಚಾರಣೆಯನ್ನು ನಡೆಸಿ, ಇವರ ಮೇಲಿನ ಅನಧಿಕೃತ ಗೈರುಹಾಜರಿ ಆರೋಪವು ನಿಸ್ಸಂಶಯವಾಗಿ ರುಜುವಾತಾಗಿದೆ ಎಂಬ ನಿರ್ಣಯವನ್ನು ಸಲ್ಲಿಸಿದ್ದಾರೆ.

ಮೇಲೆ (5)ರ ಓದಲಾದ ವಿಚಾರಣಾ ವರದಿಯೊಂದಿಗೆ ತಿಳುವಳಿಕೆ ಪತ್ರವನ್ನು ಆರೋಪಿತ ಅಧಿಕಾರಿಗೆ ದಿನಾಂಕ: 18/09/2008 ರಂದು ಜಾರಿಗೊಳಿಸಿ, ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ತಮ್ಮ ಹೇಳಿಕೆ ಏನಾದರೂ ಇದ್ದಲ್ಲಿ ಲಿಖಿತ ಮೂಲಕ ಸಲ್ಲಿಸುವಂತೆ ನಿರ್ದೇಶನ ನೀಡಿದ್ದರು. ಆದರೆ ಸದರಿ ನೋಟೀಸು ಸ್ವೀಕೃತವಾಗದೆ ಅಂಚೆ ಇಲಾಖೆಯಿಂದ ಹಿಂದಿರುಗಿರುತ್ತದೆ.

ಮೇಲೆ (6) ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕು.ಕ.ಸೇವೆಗಳು, ಬೆಂಗಳೂರು ರವರು ಸದರಿ ವೈದ್ಯಾಧಿಕಾರಿಯು ಸರ್ಕಾರದ ಪತ್ರಗಳಿಗೆ ಯಾವುದೇ ಉತ್ತರ ನೀಡದೆ ಇರುವುದರಿಂದ ಹಾಗೂ ಇವರ ವಿಳಾಸಕ್ಕೆ ಕಳುಹಿಸಿದ ಪತ್ರಗಳು ಹಿಂದಿರುಗಿ ಬಂದಿರುವುದರಿಂದ ಹಾಗು ವೈದ್ಯರು ಇಲಾಖಾ ವಿಚಾರಣೆಗೂ ಸಹ ಹಾಜರಾಗದೆ ಇರುವ ಕಾರಣ ಸದರಿ ವೈದ್ಯರ ಅನಧಿಕೃತ ಗೈರುಹಾಜರಿ ಬಗ್ಗೆ ಮುಂದಿನ ಕ್ರಮ ಕೈಗೊಳ್ಳುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರವು ವಿಚಾರಣಾ ವರದಿ, ಸಾಕ್ಷಿಗಳು, ದಾಖಲಾತಿಗಳು ಹಾಗು ಆಯುಕ್ತರ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಈ ಪ್ರಕರಣದಲ್ಲಿ ದಾಖಲಾತಿಗಳನ್ನು ಪರಿಶೀಲಿಸಿದಾಗ ವ್ಯಕ್ತವಾಗುವ ಅಂಶವೆಂದರೆ, ಆಪಾದಿತ ವೈದ್ಯರು ಒಬ್ಬ ಜವಾಬ್ದಾರಿಯುತ ಪತ್ರಾಂಕಿತ ಮಟ್ಟದ ಸರ್ಕಾರಿ ವೈದ್ಯರಾಗಿದ್ದು, ಕಾರಣ ನೀಡದೆ ಯಾವುದೇ ರಜೆಯನ್ನು ಸಲ್ಲಿಸದೆ ದಿನಾಂಕ: 06/09/2004 ರಿಂದ 30/09/2004 ರ ವರೆಗೆ ರಜೆ ಮೇಲೆ ತೆರಳಿ, ರಜೆ ಮುಗಿದ ನಂತರ ದಿನಾಂಕ: 01/10/2004 ರಿಂದ ಸರ್ಕಾರಿ ಕೆಲಸಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಅಥವಾ ರಜೆ ಮಂಜೂರಾತಿ ಇಲ್ಲದೆ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದು, ನೋಟೀಸಿಗೂ ಮತ್ತು ಪತ್ರಿಕಾ ಪ್ರಕಟಣೆಗೂ ಸ್ಪಂದಿಸದೆ ಇರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಇವರು ಖಾಯಂ ಪೂರ್ವ ಸೇವಾವಧಿಯನ್ನು ಪೂರೈಸದೆ ಇರುವುದರಿಂದ ಹಾಗು ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿರುವುದು ದಾಖಲಾತಿಗಳಿಂದ ದೃಢಪಡುತ್ತದೆ. ಆದ್ದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 135 ಎಂಎಸ್ಎ 2009, ಬೆಂಗಳೂರು, ದಿನಾಂಕ : 24/ 08/ 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಡಾ:ಎಸ್.ವೆಂಕಟಲಕ್ಷ್ಮಿ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಂಗೇನಹಳ್ಳಿ, ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ ಇವರು ಸರ್ಕಾರಿ ಸೇವೆಗೆ ದಿನಾಂಕ: 01/10/2004 ರಿಂದ ಇದುವರೆವಿಗೂ ಸರ್ಕರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವುದು ಹಾಗೂ ಇವರು ಖಾಯಂ ಪೂರ್ವಸೇವಾವಧಿಯಲ್ಲಿಯೇ ಸರ್ಕಾರಿ ನೌಕರರಿಗೆ ತಕ್ಕದ್ದಲ್ಲದ ರೀತಿಯಲ್ಲಿ ವರ್ತಿಸಿ, ಕರ್ತವ್ಯಚ್ಯುತಿ ಎಸಗಿರುವುದರಿಂದ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನರಿ) ನಿಯಮಾವಳಿಗಳು 1977ರ, ನಿಯಮ–6 ರಡಿಯಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪದ್ಮಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೩ |
|---|---|---|

**ಕರ್ನಾಟಕ ಸರ್ಕಾರದ ನಡವಳಿಗಳು**

**ಒಳಾಡಳಿತ ಸಚಿವಾಲಯ**

**ವಿಷಯ :** ಜೈಲರ್ ಹುದ್ದೆಗೆ ನೇಮಕಾತಿ ಮಾಡಲು ಇಲಾಖಾ ನೇಮಕಾತಿ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 58 ಪಿಆರ್‌ಇ 2003, ದಿನಾಂಕ:13.08.2003.

2) ಸರ್ಕಾರದ ಪತ್ರ ಸಂಖ್ಯೆ: ಹೆಚ್‌ಡಿ 29 ಪಿಆರ್‌ಇ 2006, ದಿನಾಂಕ: 20.03.2008.

3) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 36 ಪಿಆರ್‌ಇ 2007, ದಿನಾಂಕ: 24.09.2008.

4) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 32 ಪಿಆರ್‌ಇ 2006, ದಿನಾಂಕ: 26.04.2006.

5) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು, ಇವರ ಪತ್ರಸಂಖ್ಯೆ:ಇ4:ಸಿಆರ್–43:2008, ದಿನಾಂಕಃ 22.09.2008.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ 11 ಜೈಲರ್ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಇಲಾಖಾ ನೇಮಕಾತಿ ಸಮಿತಿಯನ್ನು ರಚಿಸಲಾಗಿತ್ತು.

| | | |
|---|---|---|
| 1. ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು | -- | ಅಧ್ಯಕ್ಷರು |
| 2. ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಅಥವಾ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ನಾಮ ನಿರ್ದೇಶನ ಹೊಂದಿದ ಅಧಿಕಾರಿ | -- | ಸದಸ್ಯರು |
| 3. ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆಯ ನಿರ್ದೇಶಕರು ಅಥವಾ ಜಂಟಿ ನಿರ್ದೇಶಕರು ದರ್ಜೆಗೆ ಕಡಿಮೆ ಇಲ್ಲದ ನಾಮ ನಿರ್ದೇಶನ ಹೊಂದಿದ ಅಧಿಕಾರಿ | -- | ಸದಸ್ಯರು |
| 4. ಡಾ: ಸುಧಾ ಭೋಗಲೆ ರೀಡರ್, ಮನಃಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | -- | ಸದಸ್ಯರು |
| 5. ಶ್ರೀ ಎನ್.ಜಯರಾಮಯ್ಯ, ಕಾರಾಗೃಹಗಳ ಉಪಮಹಾನಿರೀಕ್ಷಕರು | -- | ಸದಸ್ಯ ಕಾರ್ಯದರ್ಶಿ |

ಮೇಲೆ (2) ರಲ್ಲಿ ಓದಲಾದ ಪತ್ರದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ ಗ್ರೂಪ್– 'ಸಿ' ಮತ್ತು ಗ್ರೂಪ್–'ಡಿ' ವೃಂದದ ಹುದ್ದೆಗಳಿಗೆ ನೇರನೇಮಕಾತಿ ನಿಯಮಗಳನ್ನು ಅನುಸರಿಸಿ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಲಾಗಿತ್ತು. ಇದರಲ್ಲಿ 11 ಜೈಲರ್ ಹುದ್ದೆಗಳು ಸೇರಿರುತ್ತವೆ.

ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಹಾಲಿ ಖಾಲಿ ಇದ್ದ 3 ಜೈಲರ್ ಹುದ್ದೆಗಳನ್ನು ನಿಯಮಾನುಸಾರ ನೇರ ನೇಮಕಾತಿಯಿಂದ ಭರ್ತಿ ಮಾಡಿಕೊಳ್ಳಲು ಮಂಜೂರಾತಿಯನ್ನು ನೀಡಲಾಗಿತ್ತು. ಮುಂದುವರಿದು, ಹೊಸ ಕಾರಾಗೃಹಗಳಿಗೆ ಹಾಗೂ ಉನ್ನತ ದರ್ಜೆಗೇರಿಸಲಾದ ಕಾರಾಗೃಹಗಳಿಗೆ ಒಟ್ಟು 14 ಜೈಲರ್ ಹುದ್ದೆಗಳನ್ನು ಸೃಜಿಸಲು ಮತ್ತು ಇವುಗಳನ್ನು ನಿಯಮಾನುಸಾರ ನೇರ ನೇಮಕಾತಿಯಿಂದ ಭರ್ತಿ ಮಾಡಿಕೊಳ್ಳಲು ಮಂಜೂರಾತಿಯನ್ನು ನೀಡಲಾಗಿತ್ತು.

ಮೇಲೆ (4) ರಲ್ಲಿ ಓದಲಾದ ಸರ್ಕಾರದ ಆದೇಶದ ಮೇರೆಗೆ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರು ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ ಜೈಲರ್ ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ರಚಿಸಲಾದ ಇಲಾಖಾ ನೇಮಕಾತಿ ಸಮಿತಿಯಲ್ಲಿ ಶ್ರೀ ಎನ್.ಜಯರಾಮಯ್ಯ ಇವರನ್ನು ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಿದ್ದರು. ತದನಂತರ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರವರು ಮೇಲೆ (5) ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಶ್ರೀ ಎನ್.ಜಯರಾಮಯ್ಯರವರು ದಿನಾಂಕಃ 31.05.2008 ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಆದ್ದರಿಂದ ಅವರ ಬದಲಿಗೆ ಹಾಲಿ ಕಾರಾಗೃಹಗಳ ಉಪ ಮಹಾನಿರೀಕ್ಷಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ವಿ.ಎಸ್.ರಾಜಾ, ಇವರನ್ನು ಜೈಲರ್ ಹುದ್ದೆಯ ನೇಮಕಾತಿ ಸಮಿತಿಯ ಸದಸ್ಯ ಕಾರ್ಯದರ್ಶಿಗಳನ್ನಾಗಿ ನೇಮಿಸಬೇಕೆಂದು ಕೋರಿ, ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಈ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 93 ಪಿಆರ್‌ಇ 2008, ಬೆಂಗಳೂರು, ದಿನಾಂಕ : 12.08.2009.**

ಈ ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಕಾರಾಗೃಹಗಳ ಇಲಾಖೆಯಲ್ಲಿ ಹಾಲಿ ಖಾಲಿ ಇರುವ ಜೈಲರ್ ಹುದ್ದೆಗಳನ್ನು ನಿಯಮಾನುಸಾರ ನೇರ ನೇಮಕಾತಿಯ ಮೂಲಕ ಭರ್ತಿ ಮಾಡಿಕೊಳ್ಳಲು ಈ ಕೆಳಕಂಡಂತೆ ಇಲಾಖಾ ನೇಮಕಾತಿ ಸಮಿತಿಯನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿ ಸರ್ಕಾರವು ಆದೇಶಿಸಿದೆ.

| | | | |
|---|---|---|---|
| 1. | ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು | -- | ಅಧ್ಯಕ್ಷರು |
| 2. | ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಅಥವಾಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ನಾಮ ನಿರ್ದೇಶನ ಹೊಂದಿದ ಅಧಿಕಾರಿ | -- | ಸದಸ್ಯರು |
| 3. | ನಿರ್ದೇಶಕರು, ಹಿಂದುಳಿದ ವರ್ಗಗಳ ಮತ್ತು ಅಲ್ಪ ಸಂಖ್ಯಾತರ ಇಲಾಖೆ ಅಥವಾ ಜಂಟಿ ನಿರ್ದೇಶಕರ ಹುದ್ದೆಯ ದರ್ಜೆಗೆ ಕಡಿಮೆ ಇಲ್ಲದ ನಾಮ ನಿರ್ದೇಶನ ಹೊಂದಿದ ಅಧಿಕಾರಿ | -- | ಸದಸ್ಯರು |
| 4. | ರೀಡರ್, ಮನಃಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು | -- | ಸದಸ್ಯರು |
| 5. | ಕಾರಾಗೃಹಗಳ ಉಪಮಹಾನಿರೀಕ್ಷಕರು, ಕೇಂದ್ರಸ್ಥಾನ ಶೇಷಾದ್ರಿರಸ್ತೆ, ಬೆಂಗಳೂರು | -- | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

# ವಿಶೇಷ ಪತ್ರಿಕೆ

| ಭಾಗ – I | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೪ |
|---|---|---|

## ಕರ್ನಾಟಕ ಸರ್ಕಾರದ ನಡವಳಿಗಳು

## ಒಳಾಡಳಿತ ಸಚಿವಾಲಯ

**ವಿಷಯ :** ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆ ಎಂದು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**

1) ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 109 ಪಿಆರ್‌ಇ 2008, ದಿನಾಂಕಃ23.01.2009 ಮತ್ತು ತಿದ್ದೋಲೆ ಸಂಖ್ಯೆ: ಹೆಚ್‌ಡಿ 109 ಪಿಆರ್‌ಇ 2008, ದಿನಾಂಕಃ 30.01.2009.

2) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 145 ಎಸ್‌ಪಿಎಸ್ 2008, ದಿನಾಂಕ ಃ 04.07.2009.

3) ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರ ಪತ್ರ ಸಂಖ್ಯೆ:ಕ.ಸಿ.ಪಿ./ನಗದು/ಸಿಆರ್–02:2009–10, ದಿನಾಂಕಃ 16.07.2009.

**ಪ್ರಸ್ತಾವನೆ :**

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರ ಹುದ್ದೆಯಲ್ಲಿ ಶ್ರೀ ಧರ್ಮಪಾಲ್ ನೇಗಿ, ಐ.ಪಿ.ಎಸ್.(ಕೆ.ಎನ್.78) ಇವರು ದಿನಾಂಕಃ 14.07.2008 ರಿಂದ ಕರ್ತವ್ಯ ನಿರ್ವಹಿಸುತ್ತಿದ್ದರು. ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ, ಸದರಿ ಹುದ್ದೆಯನ್ನು ವೇತನ ಶ್ರೇಣಿ ರೂ.22400–525–24500 ರಲ್ಲಿ ದಿನಾಂಕಃ 14.07.2008 ರಿಂದ ಒಂದು ವರ್ಷದ ಅವಧಿಗೆ ಅಥವಾ ಶ್ರೀ ಧರ್ಮಪಾಲ್ ನೇಗಿ, ಐ.ಪಿ.ಎಸ್. (ಕೆ.ಎನ್.78) ಇವರು ಸದರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಿ ಆದೇಶಿಸಲಾಗಿತ್ತು.

ಶ್ರೀ ಧರ್ಮಪಾಲ್ ನೇಗಿ, ಐ.ಪಿ.ಎಸ್.(ಕೆ.ಎನ್.78), ಇವರು ದಿನಾಂಕಃ30.06.2009 ರಂದು ವಯೋನಿವೃತ್ತಿ ಹೊಂದಿರುತ್ತಾರೆ. ಮೇಲೆ (2) ರಲ್ಲಿ ಓದಲಾದ ಅಧಿಸೂಚನೆಯಲ್ಲಿ, ಶ್ರೀ ಬಿಪಿನ್ ಗೋಪಾಲಕೃಷ್ಣ, ಐ.ಪಿ.ಎಸ್. (ಕೆ.ಎನ್.82), ಇವರಿಗೆ ಪೊಲೀಸ್ ಮಹಾನಿರೀಕ್ಷಕರ ಹುದ್ದೆಯಿಂದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಹುದ್ದೆಗೆ (ವೇತನ ಶ್ರೇಣಿ ರೂ.37400–67000 + ಗ್ರೇಡ್ ಪೇ ರೂ.12000)ಪದೋನ್ನತಿ ನೀಡಿ, ಬೆಂಗಳೂರಿನ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಗೆ ಶ್ರೀ ಧರ್ಮಪಾಲ್ ನೇಗಿ ರವರ ಜಾಗಕ್ಕೆ ನೇಮಿಸಲಾಗಿರುತ್ತದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ, ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರವರು, ಶ್ರೀ ಬಿಪಿನ್ ಗೋಪಾಲಕೃಷ್ಣ, ಐ.ಪಿ.ಎಸ್. ಇವರು ದಿನಾಂಕಃ 06.07.2009 ರಂದು ಅಪರಾಹ್ನ

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಯ ಪ್ರಭಾರವನ್ನು ವಹಿಸಿಕೊಂಡು ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಈ ದಿನಾಂಕ (06.07.2009) ದಿಂದ ಒಂದು ವರ್ಷದವರೆಗೆ ಅಥವಾ ಅವರು ಸದರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಯನ್ನು ವೇತನ ಶ್ರೇಣಿ ರೂ.37400–67000+ಗ್ರೇಡ್ ಪೇ ರೂ.12000 ರಲ್ಲಿ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಯೆಂದು ಮುಂದುವರೆಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 61 ಪಿಆರ್‌ಇ 2009, ಬೆಂಗಳೂರು, ದಿನಾಂಕ : 19.08.2009.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಐ.ಪಿ.ಎಸ್.ನಲ್ಲಿ ಎಕ್ಸ್–ಕೇಡರ್ ಹುದ್ದೆಯಾದ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು, ಈ ಹುದ್ದೆಯನ್ನು ದಿನಾಂಕ:01.07.2009 ರಿಂದ ಒಂದು ವರ್ಷದವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರೆಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ, ಮುಂದುವರಿಸಲು ಸರ್ಕಾರವು ಆದೇಶಿಸಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಸೇವೆಗಳು–4) ಟಿಪ್ಪಣಿ ಸಂಖ್ಯೆ: ಸಿಆಸುಇ 176 ಎಸ್‌ಪಿಎಸ್ 2009, ದಿನಾಂಕ:17.08.2009ರಲ್ಲಿ ನೀಡಿದ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೫ |
|---|---|---|

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂ. ಹೆಚ್‌ಡಿ 162 ಪಿಆರ್‌ಎ 2009, ಬೆಂಗಳೂರು, ದಿನಾಂಕ : 18ನೇ ಆಗಸ್ಟ್, 2009**

ಕರ್ನಾಟಕ ಕಾರಾಗೃಹ ಅಧಿನಿಯಮ, 1963ರ ಕಲಂ 2(ಜೆ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪರ್‌ಸ್ಪೆಕ್ಟೀವ್ ಪ್ಲಾನ್ 2002–07 ರಡಿಯಲ್ಲಿ ಕೊಪ್ಪಳ ತಾಲ್ಲೂಕಿನ ಕೊಪ್ಪಳ ಗ್ರಾಮದ ಸರ್ವೆ ನಂ. 411/4 ರಲ್ಲಿ 3.00 ಎಕರೆ ಸರ್ಕಾರಿ ಜಮೀನಿನಲ್ಲಿ ನೂತನವಾಗಿ ನಿರ್ಮಿಸಿರುವ ಕಾರಾಗೃಹ ಕಟ್ಟಡ ಮತ್ತು ಜಮೀನನ್ನು ""**ಜಿಲ್ಲಾ ಕಾರಾಗೃಹ, ಕೊಪ್ಪಳ"**" ಎಂದು ಸರ್ಕಾರವು ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೬ |
|---|---|---|

**ಒಳಾಡಳಿತ ಸಚಿವಾಲಯ**

**ಅಧಿಸೂಚನೆ**

**ಸಂ. ಹೆಚ್‌ಡಿ 163 ಪಿಆರ್‌ಎ 2009, ಬೆಂಗಳೂರು, ದಿನಾಂಕ : 18ನೇ ಆಗಸ್ಟ್, 2009**

ಕರ್ನಾಟಕ ಕಾರಾಗೃಹ ಅಧಿನಿಯಮ, 1963ರ ಕಲಂ 2(ಜೆ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಪರ್‌ಸ್ಪೆಕ್ಟೀವ್ ಪ್ಲಾನ್ 2002–07 ರಡಿಯಲ್ಲಿ ಸಕಲೇಶಪುರ ತಾಲ್ಲೂಕಿನ ಸಕಲೇಶಪುರ ಗ್ರಾಮದ ಸರ್ವೆ ನಂ. 139 ರಲ್ಲಿ 3.00

ಎಕರೆ ಸರ್ಕಾರಿ ಜಮೀನಿನಲ್ಲಿ ನೂತನವಾಗಿ ನಿರ್ಮಿಸಿರುವ ಕಾರಾಗೃಹ ಕಟ್ಟಡ ಮತ್ತು ಜಮೀನನ್ನು ""**ತಾಲ್ಲೂಕು ಉಪ ಕಾರಾಗೃಹ, ಸಕಲೇಶಪುರ"** ಎಂದು ಸರ್ಕಾರವು ಈ ಮೂಲಕ ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

# ವಿಶೇಷ ಪತ್ರಿಕೆ

| ಭಾಗ – IV-A | ಬೆಂಗಳೂರು, ಸೋಮವಾರ, ಸೆಪ್ಟೆಂಬರ್ ೭, ೨೦೦೯ (ಭಾದ್ರಪದ ೧೬, ಶಕ ವರ್ಷ ೧೯೩೧) | ನಂ. ೮೨೭ |
|---|---|---|

## HOME SECRETARIAT

## NOTIFICATION

**No. HD 608 SST 2009, Bangalore, Dated : 21st August, 2009**

In exercise of the powers conferred by Section 21 of the Code of Criminal Procedure, 1973 (Central Act II of 1974) the Government of Karnataka hereby appoints the officers specified in column (2) of the table below as Executive Magistrates for the area specified in column (3) of the table and confer on them all the powers as are conferrable on Executive Magistrates under the said code for the period from 23.08.2009 to 03.09.2008 (both days inclusive) in order to maintain Law and Order in the City of Belgaum in view of observance of **"SHRI GANESH FESTIVAL -2009".**

| Sl. No. | Name & Designation of the Officers | Area of Jurisdiction |
|---|---|---|
| 1 | 2 | 3 |
| 01. | SHRI V.N. METI, Deputy Director, Woman and Child Welfare, Belgaum. | A.P.M.C. Police Station Area, Belgaum |
| 02. | SHRI ARAVINDPRABHA, District Officer, Backward Classes and Minorities Dept., Belgaum | Udyambagh Police Station Area, Belgaum |
| 03. | SHRI K. RAMAPPA, J.D. District Water Shed Development, Belguam | Tilakwadi Police Station Area, Belgaum |
| 04. | SHRI R.G. OLEKAR, District Social Welfare Officer, Belgaum | Camp Police Station Area, Belgaum |
| 05. | SHRI P. BASAVRAJ, Joint Director of Land Records, City Survey North Zone, Belgaum | Market Police Station Area, Belgaum |
| 06. | SHRI G.M. PATIL, Deputy Registrar of Co-Operative Societies, Belgaum | Khade Bazar Police Station Area, Belgaum |
| 07. | SHRI PUNDALIK A.B., Block Education Officer, Belgaum (Urban) | Malamaruti Police Station Area, Belgaum |
| 08. | SHRI D.M. DANOJI, Block Education Officer, Belgaum (Rural) | Shahapur Police Station Area, Belgaum |
| 09. | SHRI RAVI BASARALLI, Deputy Secretary (ADM), Zilla Panchayat, Belgaum | Udyambagh Police Station Area, Belgaum |

The Government has accorded post facto approval of the order issued by the District Magistrate, Belgaum District vide No.DC.POL.CR-200/09-10, dated 18.08.2009.

By Order and in the name of the Governor of Karnataka,

**K.C. SIDDAPPA**

Under Secretary to Government

Home Department, (Law and Order)

